# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 116
ಮಾನ್ಯ ಸದಸ್ಯರ ಹೆಸರು : ಡಾ. ತೇಜಸ್ವಿನಿ ಗೌಡ(ವಿಧಾನಸಭೆಯಿಂದ ಚುನಾಯಿತರಾದವರು)
ವಿಷಯ : ಗ್ರಾಮೀಣ ಭಾಗದಲ್ಲಿ ಪ್ರವಾಸೀ ತಾಣಗಳ ಅಭಿವೃದ್ಧಿ ಕುರಿತು.
ಉತ್ತರಿಸುವ ದಿನಾಂಕ : 15.07.2019.
ಉತ್ತರಿಸುವ ಸಚಿವರು : ಪ್ರವಾಸೋದ್ಯಮ ಮತ್ತು ರೇಷ್ಮೆ ಸಚಿವರು.

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕರ್ನಾಟಕ ರಾಜ್ಯದ ಪ್ರವಾಸೀ ತಾಣಗಳು ಹಾಗೂ ಪ್ರವಾಸೋದ್ಯಮ ಇಲಾಖೆಗೆ ಬರುತ್ತಿರುವ ಆದಾಯವೆಷ್ಟು; | ಪ್ರವಾಸೋದ್ಯಮ ವಲಯದಲ್ಲಿ ನೇರ ಮತ್ತು ಪರೋಕ್ಷ ಆದಾಯದ ಮೂಲಗಳಿದ್ದು, ವರ್ಲ್ಡ್ ಟ್ರಾವೆಲ್ ಅಂಡ ಟೂರಿಸಂ ಕೌನ್ಸಿಲ್ ವರದಿಯ ಪ್ರಕಾರ ದೇಶದ ಜಿ.ಡಿ.ಪಿ.ಗೆ ಪ್ರವಾಸೋದ್ಯಮ ವಲಯದಿಂದ ಶೇ.9.3ರಷ್ಟು ಕೊಡುಗೆ ಇರುತ್ತದೆ.<br>ಪ್ರವಾಸೋದ್ಯಮ ಇಲಾಖೆಯ ಅಧೀನದಲ್ಲಿ ಬರುವ ನಿಗಮ/ಸಂಸ್ಥೆ/ಪ್ರಾಧಿಕಾರದ ವಹಿವಾಟು ಕೆಳಕಂಡಂತಿದೆ:<br>1. ಕರ್ನಾಟಕ ರಾಜ್ಯ ಪ್ರವಾಸೋದ್ಯಮ ಅಭಿವೃದ್ಧಿ ನಿಗಮ - ರೂ.70.83ಕೋಟಿಗಳು.<br>2. ಅರಣ್ಯ ವಸತಿ ಮತ್ತು ವಿಹಾರಧಾಮಗಳ ಸಂಸ್ಥೆ-ರೂ.62.44ಕೋಟಿಗಳು<br>3. ಕರ್ನಾಟಕ ವಸ್ತುಪ್ರದರ್ಶನ ಪ್ರಾಧಿಕಾರ-ರೂ.10.18ಕೋಟಿಗಳು<br>ಪ್ರವಾಸಿಗರ ಭೇಟಿಯಿಂದಾಗಿ ರಾಜ್ಯಕ್ಕೆ/ರಾಷ್ಟ್ರಕ್ಕೆ ಅತ್ಯಮೂಲ್ಯವಾದ ವಿದೇಶಿ ವಿನಿಮಯವನ್ನು ಗಳಿಸಲು ಸಾಧ್ಯವಾಗುತ್ತದೆ. |
| ಆ) | ಗ್ರಾಮೀಣ ಭಾಗದ ಸುಂದರ ಗಿರಿ-ಶಿಖರಗಳಾದ ಸಾವವದುರ್ಗ; ನಂದಿಗಿರಿ; ಚೆನ್ನಗಿರಿ; ಸ್ಕಂದಗಿರಿ; ಬ್ರಹ್ಮಗಿರಿ; ವರ್ಧನಗಿರಿ ಎಂಬ ಪಂಚಗಿರಿಗಳು ರಾಜಧಾನಿಗೆ ಕೇವಲ 50 ಕಿ.ಮೀ ದೂರದಲ್ಲಿದ್ದು ಅಪಾರ ಪ್ರವಾಸಿಗಳನ್ನು ಸೆಳೆಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |

ಇ) ಇಂತಹ ತಾಣಗಳಲ್ಲಿ ಪ್ರವಾಸಿಗರಿಗೆ ಅಗತ್ಯ ಮೂಲಭೂತ ಸೌಕರ್ಯಗಳಾದ ಸರ್ಕಾರಿ ತಂಗುದಾಣ, ಹೋಟೆಲ್, ಚಿಕಿತ್ಸಾ ಕೇಂದ್ರಗಳನ್ನು ಒದಗಿಸಲಾಗಿದೆಯೇ; ಇದಕ್ಕಾಗಿ ಅಗತ್ಯ ಹಣ ಕಾಯ್ದಿರಿಸಲಾಗಿದೆಯೇ;

ಚಿಕ್ಕಬಳ್ಳಾಪುರ ತಾಲ್ಲೂಕಿನ ಪಂಚಗಿರಿಗಳ ಸಾಲಿನಲ್ಲಿ ನಂದಿಗಿರಿ, ಚನ್ನಗಿರಿ, ಸ್ಕಂದಗಿರಿ, ಬ್ರಹ್ಮಗಿರಿ, ಹೇಮಗಿರಿ(ವರ್ಧನಗಿರಿ) ಗುರುತಿಸಿಕೊಂಡಿವೆ.

1. **ನಂದಿಗಿರಿ:** ನಂದಿಗಿರಿಧಾಮವು ತೋಟಗಾರಿಕೆ ಇಲಾಖೆಯ ವ್ಯಾಪ್ತಿಯಲ್ಲಿ ಬರುತ್ತದೆ. ಸದರಿ ಪ್ರದೇಶದಲ್ಲಿ ಪ್ರವಾಸಿಗರ ಅನುಕೂಲಕ್ಕಾಗಿ ಪ್ರಸ್ತುತ ಇರುವ ಮೂಲಭೂತ ಸೌಕರ್ಯಗಳ ವಿವರ ಕೆಳಗಿನಂತಿದೆ.

| ಸೌಲಭ್ಯಗಳ ವಿವರ | ಸಂಖ್ಯೆ | ನಿರ್ವಹಣೆ ಮಾಡುತ್ತಿರುವವರ ವಿವರ |
|---|---|---|
| **ಶೌಚಾಲಯ** | 3-ಕಾಂಪ್ಲೆಕ್ಸ್ | ತೋಟಗಾರಿಕೆ ಇಲಾಖೆ |
| **ಹೋಟೆಲ್** | 1- ಸರ್ಕಾರಿ<br>1- ಖಾಸಗಿ. | - |
| **ತಂಗುದಾಣ** | ಗಾಂಧಿನಿಲಯ 4- ಡಿ.ಪಿ.ಎ.ಆರ್<br>12- ಕೆ.ಎಸ್.ಟಿ.ಡಿ.ಸಿ<br>ಒಟ್ಟು 16 ಕೊಠಡಿಗಳು | ಡಿ.ಪಿ.ಎ.ಆರ್<br>ಕೆ.ಎಸ್.ಟಿ.ಡಿ.ಸಿ. |
| | ನೆಹರು ನಿಲಯ<br>4- ವಿ.ಐ.ಪಿ,<br>14- ಡಿಲೆಕ್ಸ್,<br>6- ಕಾಟೇಜ್‌ಗಳು<br>ಒಟ್ಟು 24 ಕೊಠಡಿಗಳು) | ತೋಟಗಾರಿಕೆ ಇಲಾಖೆ |
| | ಲೋಕೋಪಯೋಗಿ ಇಲಾಖೆಯ<br>4-ಕೊಠಡಿಗಳು | ಲೋಕೋಪಯೋಗಿ ಇಲಾಖೆ |
| | ಬೆಸ್ಕಾಂ<br>4-ಕೊಠಡಿಗಳು | ಬೆಸ್ಕಾಂ |
| | **ಒಟ್ಟು 48 ಕೊಠಡಿಗಳು** | |
| **ಚಿಕಿತ್ಸಾ ಕೇಂದ್ರ** | ಕಾರ್ಯ ನಿರ್ವಹಿಸುತ್ತಿಲ್ಲ | |
| **ಕುಡಿಯುವ ನೀರು** | 3-ಕೊಳವೆ ಬಾವಿಗಳನ್ನು ಕೊರೆಸಲಾಗಿದೆ. | ತೋಟಗಾರಿಕೆ ಇಲಾಖೆ |

2018-19ನೇ ಸಾಲಿನಲ್ಲಿ ನಂದಿಗಿರಿಧಾಮದಲ್ಲಿ ಪ್ರವಾಸೋದ್ಯಮ ಇಲಾಖೆವತಿಯಿಂದ ಅಗತ್ಯ ಮೂಲಭೂತ ಸೌಕರ್ಯಗಳನ್ನು ಒದಗಿಸಲು ರೂ.10.00 ಕೋಟಿ ಅಂದಾಜು ವೆಚ್ಚಗಳಲ್ಲಿ ಕೈಗೊಳ್ಳಲು ಸರ್ಕಾರದ ಅನುಮೋದನೆ ಪಡೆಯಲಾಗಿದೆ. ಈ ಸಂಬಂಧ ಅಂದಾಜು ಪಟ್ಟಿಗಳನ್ನು ಸಿದ್ಧಪಡಿಸಿಕೊಳ್ಳಲಾಗುತ್ತಿದೆ.

...3

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| | | 2. **ಸ್ಕಂದಗಿರಿ**: ಸ್ಕಂದಗಿರಿಯು ಅರಣ್ಯ ಇಲಾಖಾ ವ್ಯಾಪ್ತಿಗೆ ಬರುತ್ತದೆ. ಇದು ಅರಣ್ಯ ಸಂರಕ್ಷಿತ ಪ್ರದೇಶವಾಗಿರುತ್ತದೆ ಸ್ಕಂದಗಿರಿಯಲ್ಲಿ ಮಾತ್ರ ಪ್ರವಾಸಿಗರಿಗೆ ಚಾರಣ ವ್ಯವಸ್ಥೆಯನ್ನು ಕಲ್ಪಿಸಲಾಗಿದೆ. ಸದರಿ ಚಾರಣವನ್ನು ಅರಣ್ಯ ಇಲಾಖಾ ವ್ಯಾಪ್ತಿಯಲ್ಲಿ ಬರುವ ಇಕೋ ಟೂರಿಸಂ ಮಂಡಳಿಯ ಮುಖಾಂತರ ಆನ್ ಲೈನ್‌ನಲ್ಲಿ ಕಾರ್ಯ ನಿರ್ವಹಿಸಲಾಗಿರುತ್ತದೆ ಮತ್ತು ಮೂಲಭೂತ ಸೌಕರ್ಯಗಳಿಗಾಗಿ ಉಪ ಅರಣ್ಯ ಸಂರಕ್ಷಣಾಧಿಕಾರಿ ಚಿಕ್ಕಬಳ್ಳಾಪುರ ರವರು ಅರಣ್ಯ ಇಲಾಖೆಯ ಮುಖ್ಯ ಕಛೇರಿಗೆ ಪ್ರಸ್ತಾವನೆಯನ್ನು ಸಲ್ಲಿಸಿದ್ದಾರೆ.<br>3. ಉಳಿದ **ಚೆನ್ನಗಿರಿ, ಬ್ರಹ್ಮಗಿರಿ, ವರ್ಧನಗಿರಿಗಳು** ಅರಣ್ಯ ಇಲಾಖೆಯ ವ್ಯಾಪ್ತಿಯಲ್ಲಿ ಬರುತ್ತದೆ. ಸದರಿ ಗಿರಿಗಳು ಮೀಸಲು ಅರಣ್ಯ ಪ್ರದೇಶವಾಗಿರುತ್ತದೆ.<br>4. **ರಾಮನಗರ ಜಿಲ್ಲೆಯ ಸಾವನದುರ್ಗ** ಪ್ರದೇಶದಲ್ಲಿ 2014-15ನೇ ಸಾಲಿನಲ್ಲಿ ರೂ.15.00 ಲಕ್ಷಗಳ ಅಂದಾಜು ಮೊತ್ತದಲ್ಲಿ ಶೌಚಾಲಯ ನಿಮಾಣ ಮಾಡಲಾಗಿದೆ ಹಾಗೂ 2018-19ನೇ ಸಾಲಿನಲ್ಲಿ ಮಾಗಡಿ ತಾಲ್ಲೂಕಿನಲ್ಲಿ ಸಾವನದುರ್ಗ ಮತ್ತು ಮಂಚನಬೆಲೆ ಹಾಗೂ ಮಾಗಡಿ ಪಟ್ಟಣದಲ್ಲಿರುವ ಶ್ರೀ ರಂಗನಾಥಸ್ವಾಮಿ ದೇವಸ್ಥಾನ ಈ ತಾಣಗಳಿಗೆ ಸಂಪರ್ಕ ರಸ್ತೆ ಹಾಗೂ ಮೂಲಭೂತ ಸೌಲಭ್ಯಗಳ ಅಭಿವೃದ್ಧಿ ಕಾಮಗಾರಿಯನ್ನು ರೂ.200.00 ಲಕ್ಷಗಳ ಅಂದಾಜು ಮೊತ್ತದಲ್ಲಿ ಕೈಗೊಳ್ಳಲು ಸರ್ಕಾರದ ಆದೇಶ ಪಡೆಯಲಾಗಿದೆ. ಕಾಮಗಾರಿ ಪ್ರಾರಂಭಿಸಬೇಕಿದೆ. |
| ಈ) | ಎತ್ತರದ ಅಪಾಯಕರ ತಾಣಗಳಲ್ಲಿ ಪ್ರವಾಸಿಗರು ಪ್ರವೇಶ ನಿರ್ಬಂಧಿಸಿ, ಕುಡಿತದಂತಹ ಸಮಸ್ಯೆ ತಡೆಯಲು ಸುರಕ್ಷಾ ಕ್ರಮಗಳನ್ನು ವಹಿಸಲಾಗಿದೆಯೇ; | ನಂದಿಗಿರಿಧಾಮದಲ್ಲಿ ಪ್ರವಾಸೋದ್ಯಮ ಇಲಾಖೆ, ತೋಟಗಾರಿಕೆ ಇಲಾಖೆ ವತಿಯಿಂದ ಅಪಾಯಕಾರಿ ಪ್ರದೇಶಗಳಲ್ಲಿ ತಡೆಗೋಡೆಗಳನ್ನು ನಿರ್ಮಿಸಿದ್ದು ಸೂಚನಾ ಫಲಕಗಳನ್ನು ಅಳವಡಿಸಲಾಗಿದೆ ಹಾಗೂ ಕುಡಿತದ ಸಮಸ್ಯ ತಡೆಯಲು ಸೂಚನಾ ಫಲಕಗಳನ್ನು ಅಳವಡಿಸಲಾಗಿದೆ.<br>ಸಾವನದುರ್ಗದಲ್ಲಿ ಧೂಮಪಾನ ಹಾಗೂ ಮಧ್ಯಪಾನ ನಿಷೇಧ ಭೋರ್ಡ್‌ಗಳನ್ನು ಅಳವಡಿಸಲಾಗಿದೆ.<br>ಪ್ರವಾಸಿಗರ ಸುರಕ್ಷತೆಗಾಗಿ ಸಾವನದುರ್ಗದಲ್ಲಿ 02 ಪ್ರವಾಸಿ ಮಿತ್ರ ಸಿಬ್ಬಂದಿಯನ್ನು ಮತ್ತು ನಂದಿಗಿರಿಧಾಮದಲ್ಲಿ 01 ಪ್ರವಾಸಿ ಮಿತ್ರ ಸಿಬ್ಬಂದಿಯನ್ನು ನಿಯೋಜಿಸಲಾಗಿದೆ.<br>ಸ್ಕಂದಗಿರಿ, ಚೆನ್ನಗಿರಿ, ಬ್ರಹ್ಮಗಿರಿ, ವರ್ಧನಗಿರಿಗಳು ಅರಣ್ಯ ಇಲಾಖೆಯ ವ್ಯಾಪ್ತಿಯಲ್ಲಿ ಬರುತ್ತದೆ. ಇದು ಅರಣ್ಯ ಸಂರಕ್ಷಿತ ಪ್ರದೇಶವಾಗಿರುತ್ತದೆ. ಅರಣ್ಯ ಇಲಾಖಾ ಸಿಬ್ಬಂದಿಗಳ ಮೂಲಕ ಅರಿವು ಮೂಡಿಸುತ್ತಿದ್ದು, ಯಾವುದೇ ಅಹಿತಕರ ಘಟನೆ ನಡೆಯದಂತೆ ಮುಂಜಾಗ್ರತ ಕ್ರಮ ವಹಿಸಲಾಗಿರುತ್ತದೆ. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಉ) | ಗ್ರಾಮೀಣ ಭಾಗದ ನಿರುದ್ಯೋಗಿ ಯುವ, ಪ್ರವಾಸೀ ಮಾರ್ಗದರ್ಶಿ (Nature Guide) ಗಳ ನೇಮಕಾತಿಗೆ ಸರ್ಕಾರ ಕೈಗೊಂಡ ಕ್ರಮಗಳೇನು? | ಪ್ರವಾಸೋದ್ಯಮ ಇಲಾಖೆಯ ಮುಂದೆ ಈ ರೀತಿಯ ಪ್ರಸ್ತಾವನೆ ಇರುವುದಿಲ್ಲ. |

ಪ್ರಇ 05 ಪ್ರವಾವಿ 2019

(ಸಾ.ರಾ.ಮಹೇಶ್)
ಪ್ರವಾಸೋದ್ಯಮ ಮತ್ತು ರೇಷ್ಮೆ
ಸಚಿವರು